## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಸಂಖ್ಯೆ : 643

ಸದಸ್ಯರ ಹೆಸರು : ಶ್ರೀ ಎಂ.ಪಿ.ಸುನೀಲ್ ಸುಬ್ರಮಣಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 24.09.2020

ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ ಮೂರು ವರ್ಷಗಳಿಂದ ಒಂದೇ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಚಿವಾಲಯದ ನೌಕರರುಗಳ ಸಂಖ್ಯೆ ಎಷ್ಟು; ಒಂದೇ ಇಲಾಖೆಯಲ್ಲಿ ಕಾರ್ಯನಿರ್ವಹಿಸುವುದಕ್ಕೆ ಕಾರಣಗಳೇನು; (ವಿವರ ನೀಡುವುದು) | ಕರ್ನಾಟಕ ಸರ್ಕಾರ ಸಚಿವಾಲಯದ ಗ್ರೂಪ್-ಬಿ, ಸಿ ಹಾಗೂ ಡಿ ವೃಂದಗಳ ಪೈಕಿ ಒಟ್ಟು 536 ಅಧಿಕಾರಿ/ ನೌಕರರುಗಳು ಕಳೆದ ಮೂರು ವರ್ಷಗಳಿಂದ ಒಂದೇ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇದರಲ್ಲಿ 86 ಅಧಿಕಾರಿ/ ನೌಕರರುಗಳು ಮುಂಬಡ್ತಿಯ ನಂತರವೂ ಅದೇ ಇಲಾಖೆಯಲ್ಲಿನ ಖಾಲಿ ಹುದ್ದೆಗಳಿಗೆ ಸ್ಥಳನಿಯುಕ್ತಿಗೊಂಡು ಕಾರ್ಯನಿರ್ವಹಿಸುತ್ತಿದ್ದಾರೆ.<br><br>ಸರ್ಕಾರಿ ನೌಕರರ ವರ್ಗಾವಣೆ ಸಂಬಂಧ ಹೊರಡಿಸಿರುವ ಮಾರ್ಗಸೂಚಿಗಳನ್ವಯ, ಸಚಿವಾಲಯದಲ್ಲಿನ ಅಧಿಕಾರಿ/ ನೌಕರರುಗಳನ್ನು ಒಂದು ಇಲಾಖೆಯಿಂದ ಮತ್ತೊಂದು ಇಲಾಖೆಗೆ ವರ್ಗಾವಣೆ ಮಾಡುವುದನ್ನು ಚಲನವಲನವೆಂದು ಪರಿಗಣಿಸಿ, ಇಲಾಖೆಗಳನ್ನು ಸೇವಾ ನಿರತ, ನಿಯಂತ್ರಣ, ಅಭಿವೃದ್ಧಿ ಮತ್ತು ಪರಿಣಿತ / ತಾಂತ್ರಿಕ ವಿಭಾಗಗಳೆಂದು ನಾಲ್ಕು ಭಾಗಗಳಾಗಿ ವರ್ಗೀಕರಿಸಿ, ವರ್ಗೀಕರಿಸಿದ ಇಲಾಖೆಗಳಲ್ಲಿ ವೃಂದವಾರು ಕರ್ತವ್ಯ ನಿರ್ವಹಿಸಬಹುದಾದ ಕನಿಷ್ಟ/ ಗರಿಷ್ಟ ಸೇವಾವಧಿಗಳನ್ನು ನಿಗಧಿಪಡಿಸಲಾಗಿದೆ. ಇದರನ್ವಯ ಅಪರ ಕಾರ್ಯದರ್ಶಿ/ ಜಂಟಿ ಕಾರ್ಯದರ್ಶಿ/ ಉಪ ಕಾರ್ಯದರ್ಶಿ/ ಅಧೀನ ಕಾರ್ಯದರ್ಶಿ ಮತ್ತು ಶಾಖಾಧಿಕಾರಿ ವೃಂದದ ಅಧಿಕಾರಿಗಳು ಕನಿಷ್ಟ 3 ವರ್ಷ ಗರಿಷ್ಟ 6 ವರ್ಷಗಳು ಹಾಗೂ ಹಿರಿಯ ಸಹಾಯಕ / ಸಹಾಯಕ/ ಕಿರಿಯ ಸಹಾಯಕ ವೃಂದದ ನೌಕರರುಗಳು ಕನಿಷ್ಟ 5 ಮತ್ತು ಗರಿಷ್ಟ 7 ವರ್ಷಗಳ ಅವಧಿಯವರೆಗೆ ಸೇವೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿರುತ್ತದೆ. |

| | | |
|---|---|---|
| ಆ | 'ಡಿ' ಗ್ರೂಪ್, ಕಿರಿಯ ಸಹಾಯಕ ಮತ್ತು ಮೇಲ್ಪಟ್ಟ ಹುದ್ದೆಗಳಿಂದ ಬಡ್ತಿ ಪಡೆದ ನಂತರವು ಅದೇ ಇಲಾಖೆಯಲ್ಲಿ ಮುಂದುವರೆಯುತ್ತಿರುವ ನೌಕರರ ಸಂಖ್ಯೆ ಎಷ್ಟು; ಇದಕ್ಕೆ ಕಾರಣಗಳೇನು; (ವಿವರ ನೀಡುವುದು) | 59 ಹಿರಿಯ ಸಹಾಯಕರು<br>01 ಶೀಘ್ರಲಿಪಿಗಾರರು<br>26 ಸಹಾಯಕರು<br><br>ಆಯಾ ಇಲಾಖಾ ಸಚಿವರ ಹಾಗೂ ಇಲಾಖಾ ಮುಖ್ಯಸ್ಥರುಗಳ ಮತ್ತು ವೈಯಕ್ತಿಕ ಕೋರಿಕೆಗಳನ್ವಯ ಮುಂದುವರೆಸಲಾಗಿದೆ. |
| ಇ | ಸಚಿವಾಲಯದ ನೌಕರರುಗಳಿಗೆ ಗರಿಷ್ಠ ಮೂರು ವರ್ಷ ತುಂಬಿದ ನಂತರ ಆಯಾ ಇಲಾಖೆಯಿಂದ ಬೇರೆ ಇಲಾಖೆಗೆ ಕಡ್ಡಾಯ ವರ್ಗಾವಣೆ ಮಾಡಲು ಇರುವ ತೊಡಕುಗಳೇನು? (ವಿವರ ನೀಡುವುದು) | 'ಅ' ಪ್ರಶ್ನೆಗೆ ನೀಡಿರುವ ಉತ್ತರದಲ್ಲಿನ ಮಾರ್ಗಸೂಚಿಯನ್ವಯ ಅನುಸರಿಸಲಾಗುತ್ತಿದೆ. |

ಸಂಖ್ಯೆ: ಸಿಆಸುಇ 106 ರಾಸಾ 2020

ಬಿ.ಎಸ್.ಯಡಿಯೂರಪ್ಪ

ಬಿ.ಎಸ್.ಯಡಿಯೂರಪ್ಪ
ಮುಖ್ಯಮಂತ್ರಿಗಳು